ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಡಾ|| ತೇಜಸ್ವಿನಿ ಗೌಡ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1133** |
| ಉತ್ತರಿಸಬೇಕಾದ ದಿನಾಂಕ | : | 22.12.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಈವರೆಗೆ ಒದಗಿಸಿರುವ ವಸತಿ ಸಂಖ್ಯೆ ಎಷ್ಟು; (ಕಳೆದ ಮೂರು ವರ್ಷಗಳಲ್ಲಿ) | ರಾಜ್ಯದಲ್ಲಿ 2018-19 ರಿಂದ ಇಲ್ಲಿಯವರೆಗೆ ವಿವಿಧ ವಸತಿ ಯೋಜನೆಗಳಡಿಯಲ್ಲಿ 63187 ಫಲಾನುಭವಿಗಳನ್ನು ಆಯ್ಕೆ ಮಾಡಿ ಕಾಮಗಾರಿ ಆದೇಶ ನೀಡಲಾಗಿದೆ. ಯೋಜನಾವಾರು ವಿವರ ಈ ಕೆಳಕಂಡಂತಿದೆ :- |
| (ಆ) | ಪ್ರಸ್ತುತ ನೀಡುತ್ತಿರುವ ಅನುದಾನವು ಸುಸಜ್ಜಿತ ಸುರಕ್ಷಿತ ಮನೆಯನ್ನು ನಿರ್ಮಿಸಲು ಸಾಗಾಗುತ್ತಿಲ್ಲ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ; | (see table below) |

| ಯೋಜನೆ | ಆರ್ಥಿಕ ವರ್ಷ | ಅನುಮೋದನೆಗೊಂಡ ಮನೆಗಳು |
|---|---|---|
| ಬಸವ ವಸತಿ ಯೋಜನೆ | 2018-19 | 467 |
| ದೇವರಾಜ ಅರಸು ವಸತಿ ಯೋಜನೆ (ಗ್ರಾಮೀಣ) | | 1111 |
| ದೇವರಾಜ ಅರಸು ವಸತಿ ಯೋಜನೆ (ನಗರ) | | 143 |
| ವಾಜಪೇಯಿ ನಗರ ವಸತಿ ಯೋಜನೆ | | 36 |
| ದೇವರಾಜ ಅರಸು ವಸತಿ ಯೋಜನೆ (ಗ್ರಾಮೀಣ) | 2019-20 | 492 |
| ದೇವರಾಜ ಅರಸು ವಸತಿ ಯೋಜನೆ (ನಗರ) | | 57 |
| ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | | 40685 |
| ದೇವರಾಜ ಅರಸು ವಸತಿ ಯೋಜನೆ (ಗ್ರಾಮೀಣ) | 2020-21 | 20179 |
| ದೇವರಾಜ ಅರಸು ವಸತಿ ಯೋಜನೆ (ನಗರ) | | 17 |
| ಒಟ್ಟು | | 63187 |

ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ರಡಿ 2018-19 ರಿಂದ ಇಲ್ಲಿಯವರೆಗೆ 131671 ಮನೆಗಳು ಅನುಮೋದನೆಗೊಂಡಿರುತ್ತದೆ.

ವಿವಿಧ ವಸತಿ ಯೋಜನೆಗಳಡಿ ಮನೆಗಳನ್ನು ಫಲಾನುಭವಿಗಳೇ ನಿರ್ಮಿಸಿಕೊಳ್ಳುತ್ತಿದ್ದು, ಸರ್ಕಾರವು ಸಹಾಯಧನವನ್ನು (Subsidy) ಮಾತ್ರ ನೀಡುತ್ತಿದೆ.

(ಇ) ಇತ್ತೀಚೆಗ ರಾಜ್ಯದಲ್ಲಿ ಸಂಭವಿಸಿದ ಅತಿ ಮಳೆಯಿಂದ ಹಾನಿಗೀಡಾದ ಮನೆಗಳ ಸಂಖ್ಯೆ ಎಷ್ಟು; ಹಾನಿಗೀಡಾದವರಿಗೆ, ಪೂರ್ಣ ಮನೆ ನಾಶವಾದವರಿಗೆ ಪರ್ಯಾಯವಾಗಿ ವಸತಿ ನಿರ್ಮಾಣದ ಯೋಜನೆ ಇದೆಯೇ; (ವಿವರ ನೀಡುವುದು)

ಇತ್ತೀಚೆಗೆ ಅಂದರೆ 2021ನೇ ಸಾಲಿನಲ್ಲಿ ರಾಜ್ಯದಲ್ಲಿ ಸಂಭವಿಸಿದ ಅತಿ ಮಳೆಯಿಂದ ಒಟ್ಟು 53501 ಮನೆಗಳು ಹಾನಿಯಾಗಿರುವುದಾಗಿ ತಹಶೀಲ್ದಾರರು ನಮೂದಿಸಿದ್ದು, ಆ ಪೈಕಿ 40562 ಮನೆಗಳನ್ನು ಜಿಲ್ಲಾಧಿಕಾರಿಗಳು ಅನುಮೋದಿಸಿದ್ದು, ವರ್ಗವಾರು ವಿವರ ಈ ಕೆಳಕಂಡಂತಿದೆ :-

| ಕ್ರ.ಸಂ. | ಮನೆಯ ವರ್ಗ | ನಿಗದಿಪಡಿಸಲಾದ ಪರಿಹಾರ ಮೊತ್ತ | ನಮೂದು | ಅನುಮೋದನೆ |
|---|---|---|---|---|
| 1 | ಸಂಪೂರ್ಣ ಮನೆ ಹಾನಿ-ಎ | ರೂ.5.00 ಲಕ್ಷಗಳು | 3049 | 1998 |
| 2 | ಭಾಗಶಃ ಮನೆ ಹಾನಿ (ಪುನರ್ ನಿರ್ಮಾಣ)-ಬಿ2 | ರೂ.5.00 ಲಕ್ಷಗಳು | 5835 | 4715 |
| 3 | ಭಾಗಶಃ ಮನೆ ಹಾನಿ (ದುರಸ್ತಿ)-ಬಿ1 | ರೂ.3.00 ಲಕ್ಷಗಳು | 3041 | 1280 |
| 4 | ಅಲ್ಪಸ್ವಲ್ಪ ಮನೆ ಹಾನಿ-ಸಿ | ರೂ.50,000/-ಗಳು | 25835 | 18593 |
| 5 | ಭಾಗಶಃ-ಬಿ | | 15691* | 13976 |
| ಒಟ್ಟು | | | 53501 | 40562 |

* ಬಿ ವರ್ಗದ 15691 ಮನೆಗಳ ಹಾನಿ ಪ್ರಮಾಣವನ್ನು ಗಣನೆಗೆ ತೆಗೆದುಕೊಂಡು ಮನೆಯ ವರ್ಗವನ್ನು ಬಿ1 ಅಥವಾ ಬಿ2 ಎಂದು ತಹಶೀಲ್ದಾರರು/ಜಿಲ್ಲಾಧಿಕಾರಿಗಳು ವಿಂಗಡಣೆ ಮಾಡಬೇಕಾಗಿರುತ್ತದೆ (ದಿನಾಂಕ: 13.12.2021 ರವರೆಗಿನ ಮಾಹಿತಿಯಂತೆ).

ಸಂಪೂರ್ಣ ಹಾನಿಯಾದ ಮನೆಗಳ ಸಂತ್ರಸ್ತರಿಗೆ ಮನೆಗಳನ್ನು ಪುನರ್ ನಿರ್ಮಿಸಲು ರಾಜ್ಯ ಸರ್ಕಾರವು ರೂ.5.00 ಲಕ್ಷಗಳ ಪರಿಹಾರವನ್ನು ನಿಗದಿಪಡಿಸಿದ್ದು ಜಿಲ್ಲಾಧಿಕಾರಿಗಳಿಂದ ಅನುಮೋದನೆಗೊಂಡ ಫಲಾನುಭವಿಗಳು ನಿರ್ಮಿಸಿರುವ ಮನೆಗಳ ವಿವಿಧ ಹಂತಗಳ ಜಿಪಿಎಸ್ ಛಾಯಾಚಿತ್ರಗಳನ್ನು ತಹಶೀಲ್ದಾರ್ ರವರು ಪರಿಶೀಲಿಸಿ, ಅರ್ಹಗೊಳಿಸಿ ಅನುದಾನ ದೃಢೀಕರಣ (Payment Certification) ನೀಡಿದ ನಂತರ ಪ್ರಗತಿಯಲ್ಲಿರುವ ಎಲ್ಲಾ ಮನೆಗಳಿಗೆ ಪ್ರಗತಿಗನುಗುಣವಾಗಿ DBT ಆಧಾರ್ ಆಧಾರಿತವಾಗಿ ಪರಿಹಾರ ಪಾವತಿ ಮಾಡಲಾಗುವುದು.

(ಈ) ವಿವಿಧ ವರ್ಗವಣೆ (ಆರ್ಥಿಕ ಹಿಂದುಳಿದವರಿಗೆ, ಬಡತನದ ರೇಖೆಯ ಕೆಳಗಿನವರಿಗೆ) ಮನೆ

ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತದಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರದ ವಿವಿಧ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಸದರಿ ಯೋಜನೆಗಳಡಿ ನೀಡಲಾಗುತ್ತಿರುವ

| | | |
|---|---|---|
| | ನಿರ್ಮಾಣಕ್ಕೆ ನಿಗಧಿಯಾಗಿರುವ ಮೊತ್ತವನ್ನು 5 ಲಕ್ಷ ರೂ.ಗಳಿಗೆ ಏರಿಸುವ ಪ್ರಸ್ತಾವನೆ ಇದೆಯೇ; | ಸಹಾಯಧನದ ವಿವರ ಕೆಳಕಂಡಂತಿದೆ :- (ರೂ.ಲಕ್ಷಗಳಲ್ಲಿ) |

| ಕ್ರ.ಸಂ | ಯೋಜನೆ | ಗ್ರಾಮೀಣ | | ನಗರ | |
|---|---|---|---|---|---|
| | | ಸಾಮಾನ್ಯ / ಅಲ್ಪ ಸಂಖ್ಯಾತ | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ | ಸಾಮಾನ್ಯ / ಅಲ್ಪ ಸಂಖ್ಯಾತ | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ |
| 1 | ಬಸವ ವಸತಿ ಯೋಜನೆ (ಗ್ರಾಮೀಣ) | 1.20 | - | - | - |
| 2 | ವಾಜಪೇಯಿ ನಗರ ವಸತಿ ಯೋಜನೆ (ನಗರ) | - | - | 1.20 | - |
| 3 | ಡಾ: ಬಿ.ಆರ್. ಅಂಬೇಡ್ಕರ್ ನಿವಾಸ್ ಯೋಜನೆ (ಗ್ರಾಮೀಣ) ಮತ್ತು ನಗರ) | - | 1.75 | - | 2.00 |
| 4 | ಡಿ.ದೇವರಾಜು ಅರಸು ವಸತಿ ಯೋಜನೆ (ಗ್ರಾಮೀಣ ಮತ್ತು ನಗರ) | 1.20 | 1.50 | 1.20 | 1.50 |
| 5 | ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) | 1.20 | 1.50 | - | - |
| 6 | ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) | - | - | 1.50 | 1.50 |

| | | |
|---|---|---|
| | | ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ)ರಡಿ ಕೇಂದ್ರ ಸರ್ಕಾರದಿಂದ 60:40 ದರದಲ್ಲಿ ರೂ.72,000/-ಗಳನ್ನು ಮತ್ತು ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ)ರಡಿ ನೀಡಲಾಗುವ ಸಂಪೂರ್ಣ ಸಹಾಯಧನವಾಗಿ ಪ್ರತಿ ಫಲಾನುಭವಿಗೆ ರೂ.1.50 ಲಕ್ಷಗಳನ್ನು ಕೇಂದ್ರ ಸರ್ಕಾರವು ನೀಡುತ್ತದೆ.<br><br>ರಾಜ್ಯ ಸರ್ಕಾರದಿಂದ ನೀಡುವ ಸಹಾಯಧನವನ್ನು ಪರಿಷ್ಕರಿಸುವ ಬಗ್ಗೆ ಸಂದರ್ಭನುಸಾರ ಪರಿಶೀಲಿಸಲಾಗುವುದು. |
| (ಉ) | ನಕ್ಸಲ್ ಪೀಡಿತ ಗ್ರಾಮಗಳಲ್ಲಿ ಸುರಕ್ಷಿತವಾದ ಮನೆ ನಿರ್ಮಿಸಿ ಕೊಡುವ ಪೈಲಟ್ ಯೋಜನೆಯ ಆಲೋಚನೆ ಇಲಾಖೆಗೆ ಇದೆಯೇ; ಇದ್ದಲ್ಲಿ, ಇದಕ್ಕಾಗಿ ಮೀಸಲಿಟ್ಟಿರುವ ಹಣವೆಷ್ಟು; ಯಾವ ಕಾಲಮಿತಿಯೊಳಗೆ ಈ ಯೋಜನೆ ಕೈಗೆತ್ತಿಕೊಂಡು ಪೂರ್ಣಗೊಳಿಸಲಾಗುವುದು ? | ಪ್ರಸ್ತುತ ಸರ್ಕಾರದ ಮುಂದೆ ಈ ಕುರಿತು ಪ್ರಸ್ತಾವನೆ ಇರುವುದಿಲ್ಲ. |

(ಸಂಖ್ಯೆ : ವಇ 473 ಹೆಚ್‌ಎಂ 2021)

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು